ಗಣಾ ಶೈಲಿ

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 51 (152) |
| ಸದಸ್ಯರ ಹೆಸರು | : | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 01.02.2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| | **ಬೀದರ್ ಜಿಲ್ಲೆಯಲ್ಲಿನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಕುರಿತು** | |
| (ಅ) | 2017 ರಲ್ಲಿ ಮಂಜೂರಾದ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಫೇಸ್ ಒಂದರ ಪ್ರಕಾರ ಕಟ್ಟಡ ನಿರ್ಮಾಣಕ್ಕೆ ಎಷ್ಟು ಹಣ ಖರ್ಚು ಮಾಡಲಾಗಿದೆ; ಫೇಸ್ ಎರಡರಲ್ಲಿ ಎಷ್ಟು ಹಣ ಖರ್ಚು ಮಾಡಲಾಗಿದೆ; ಅದರ ವಿವರವನ್ನು ಒದಗಿಸುವುದು; | **ಬೀದರ್ ಜಿಲ್ಲೆಯಲ್ಲಿ ಇಂಜಿನಿಯರಿಂಗ್ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 84 ಹೆಚ್‌ಪಿಯು 2017, ದಿನಾಂಕ 16/8/2017ರಲ್ಲಿ ರೂ.58 ಕೋಟಿ ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಈ ಕಾಮಗಾರಿಗೆ ರಾಜ್ಯ ವಲಯದಿಂದ ರೂ. 38 ಕೋಟಿ ಮತ್ತು ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿ ವತಿಯಿಂದ ರೂ. 20 ಕೋಟಿ ವೆಚ್ಚ ಭರಿಸಲಾಗುವುದು. ಈ ಕಾಮಗಾರಿಯನ್ನು ಭಾರತ ಸರ್ಕಾರದ ಅಂಗಸಂಸ್ಥೆಯಾದ ಮೆ: ರೈಟ್ಸ್ ಲಿಮಿಟೆಡ್ ಮೂಲಕ ಟೆಂಡರ್ ಕರೆದು ಜಾರಿಗೊಳಿಸಲಾಗುತ್ತಿದೆ.**<br><br>**ಸದರಿ ಕಾಮಗಾರಿಯ ನೆಲಮಹಡಿ ಮತ್ತು ಮೊದಲನೇ ಮಹಡಿಯ ಕಾಮಗಾರಿಯು ಬಹುತೇಕ ಪೂರ್ಣಗೊಂಡಿದ್ದು, ಎರಡನೇ ಮಹಡಿಯ ಮೇಲ್ಚಾವಣಿಯ ಕೆಲಸ ಪೂರ್ಣಗೊಂಡಿದ್ದು, ಮೂರನೇ ಮಹಡಿಯ ಪಿಲ್ಲರ್ ಮತ್ತು ಗೋಡೆ ನಿರ್ಮಾಣ ಕಾಮಗಾರಿ ಪ್ರಗತಿಯಲ್ಲಿದ್ದು, ಶೇಕಡ 75ರಷ್ಟು ಭೌತಿಕ ಪ್ರಗತಿಯಾಗಿರುತ್ತದೆ.**<br><br>**ಸದರಿ ಕಾಮಗಾರಿಗೆ ಇದುವರೆಗೆ ರೂ. 43 ಕೋಟಿ ವೆಚ್ಚ ಮಾಡಲಾಗಿದ್ದು, ಶೇಕಡ 75ರಷ್ಟು ಪ್ರಗತಿಯಾಗಿರುತ್ತದೆ.** |

| | | |
|---|---|---|
| (ಆ) | ಈ ಕಾಲೇಜಿನ ಕಟ್ಟಡ ಮುಗಿಯುವುದು ಯಾವಾಗ ಮತ್ತು ಕಾಲೇಜು ಪ್ರಾರಂಭವಾಗುವುದು ಯಾವಾಗ ? | ಸದರಿ ಕಾಮಗಾರಿಯು ದಿನಾಂಕ 27/8/2018ರಿಂದ ಪ್ರಾರಂಭಗೊಂಡಿದ್ದು, ಕಾಮಗಾರಿ ಪೂರ್ಣಗೊಳಿಸಲು 18 ತಿಂಗಳ ಕಾಲಾವಕಾಶ ನೀಡಲಾಗಿದೆ.<br><br>ಪ್ರಸ್ತುತ ಕಾಮಗಾರಿಯು ಪ್ರಗತಿಯಲ್ಲಿದ್ದು ಕಟ್ಟಡವನ್ನು ಶೀಘ್ರವಾಗಿ ಪೂರ್ಣಗೊಳಿಸಿ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಎಐಸಿಟಿಇ ಅನುಮೋದನೆ ಪಡೆದು ಶೈಕ್ಷಣಿಕ ತರಗತಿಗಳನ್ನು ಪ್ರಾರಂಭಿಸಲಾಗುವುದು. |

ಕಡತ ಸಂಖ್ಯೆ: ಇಡಿ 10 ಹೆಚ್‌ಪಿಟಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ
ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು